

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 761 |
| ಸದಸ್ಯರ ಹೆಸರು | ಡಾ॥ ಜೈಮಾಲ ರಾಮಚಂದ್ರ<br>(ನಾಮನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | 10.03.2020. |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಸಚಿವರು |

<table>
<tr><th>ಕ್ರ.ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಬೆಂಗಳೂರು ನಗರ ಹಾಗೂ ಗ್ರಾಮಾಂತರ ಜಿಲ್ಲೆಯ ವ್ಯಾಪ್ತಿಯಲ್ಲಿನ ಸ್ಥಳಗಳಲ್ಲಿ ಎಷ್ಟು ಗ್ರಾನೈಟ್ ಕಟ್ಟಿಂಗ್ ಹಾಗೂ ಕಲ್ಲಿನ ಗಣಿಗಾರಿಕೆ ಘಟಕಗಳಿಗಾಗಿ ಪರವಾನಿಗೆಯನ್ನು ನೀಡಲಾಗಿದೆ.</td><td>ಬೆಂಗಳೂರು ನಗರ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲಾ ವ್ಯಾಪ್ತಿಯಲ್ಲಿರುವ ಗ್ರಾನೈಟ್ ಕಟ್ಟಿಂಗ್ ಘಟಕಗಳು ಮತ್ತು ಗ್ರಾನೈಟ್ ಕ್ವಾರಿಗಳ ವಿವರ ಕೆಳಕಂಡಂತಿದೆ:
<table>
<tr><th>ಕ್ರ ಸಂ.</th><th>ಜಿಲ್ಲೆ</th><th>ಗ್ರಾನೈಟ್ ಕಟಿಂಗ್ ಮತ್ತು ಪಾಲಿಷಿಂಗ್ ಘಟಕಗಳ ಸಂಖ್ಯೆ</th><th>ಗ್ರಾನೈಟ್ ಕ್ವಾರಿಗಳ ಸಂಖ್ಯೆ</th></tr>
<tr><td>1</td><td>ಬೆಂಗಳೂರು ನಗರ</td><td>188</td><td>ಇರುವುದಿಲ್ಲ</td></tr>
<tr><td>2</td><td>ಬೆಂಗಳೂರು ಗ್ರಾಮಾಂತರ</td><td>61</td><td>39</td></tr>
</table>
ಜಲ (ಮಾಲಿನ್ಯ ನಿವಾರಣೆ ಮತ್ತು ನಿಯಂತ್ರಣ) ಕಾಯ್ದೆ, 1974 ಹಾಗೂ ವಾಯು (ಮಾಲಿನ್ಯ ನಿವಾರಣೆ ಮತ್ತು ನಿಯಂತ್ರಣ) ಕಾಯ್ದೆ, 1981 ರಡಿಯಲ್ಲಿ ಮಂಡಳಿಯ ಗ್ರಾನೈಟ್ ಕಟ್ಟಿಂಗ್ ಮತ್ತು ಪಾಲಿಶಿಂಗ್ ಕೈಗಾರಿಕೆ / ಉದ್ದಿಮೆಗಳಿಗೆ ಷರತ್ತುಬದ್ಧ ಸಮ್ಮತಿ ಪತ್ರವನ್ನು ನೀಡಲಾಗುತ್ತಿದೆ. ಬೆಂಗಳೂರು ನಗ್ರ ಹಾಗೂ ಗ್ರಾಮಾಂತರ ಜಿಲ್ಲೆಯ ವ್ಯಾಪ್ತಿಯಲ್ಲಿ ಒಟ್ಟು 425 ಕಾರ್ಖಾನೆಗಳಿಗೆ ಸದರಿ ಕಾಯ್ದೆಗಳಡಿಯಲ್ಲಿ ಸಮ್ಮತಿ ಪತ್ರವನ್ನು ನೀಡಲಾಗಿದೆ.</td></tr>
<tr><td>ಆ)</td><td>ಪರವಾನಿಗೆ ಪಡೆದ ಕೆಲವೊಂದು ಸಂಸ್ಥೆಗಳು ನಿಯಮವನ್ನು ಉಲ್ಲಂಘಿಸಿ ರಾತ್ರಿ ಸಮಯದಲ್ಲಿ ಗಣಿಗಾರಿಕೆ ಮಾಡುತ್ತಿರುವುದು ಹಾಗೂ ಗ್ರಾನೈಟ್ ಕಟ್ಟಿಂಗ್ ಮಾಡುತ್ತಿರುವುದರಿಂದ ದಿನ ನಿತ್ಯ ಶಬ್ದ ಮಾಲಿನ್ಯ ಮತ್ತು ವಾಯು ಮಾಲಿನ್ಯ ಉಂಟಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?</td><td>ಗ್ರಾನೈಟ್ ಕಟ್ಟಿಂಗ್ ಮತ್ತು ಪಾಲಿಶಿಂಗ್ ಘಟಗಳು ಕರ್ನಾಟಕ ಪರಿಸರ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ಕಾರ್ಯಾಚರಣೆ ಅನುಮತಿ ಪತ್ರ (CFO) ಪತ್ರ ಪಡೆದು ಶಬ್ಧ ಮತ್ತು ವಾಯು ಮಾಲಿನ್ಯ ಕಾಯ್ದೆಯನುಸಾರ ಕಾರ್ಯನಿರ್ವಹಿಸಬೇಕಾಗಿರುತ್ತದೆ.<br><br>ರಾತ್ರಿ ಸಮಯದಲ್ಲಿ ಗಣಿಗಾರಿಕೆ ಮಾಡುತ್ತಿರುವುದು ಹಾಗೂ ಗ್ರಾನೈಟ್ ಕಟ್ಟಿಂಗ್ ಮಾಡುತ್ತಿರುವುದರಿಂದ ಶಬ್ಧ ಮಾಲಿನ್ಯ ಮತ್ತು ವಾಯು ಮಾಲಿನ್ಯ ಉಂಟಾಗುತ್ತಿರುವ ಕುರಿತು ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಗೆ ಯಾವುದೇ ದೂರು ಬಂದಿರುವುದಿಲ್ಲ.<br><br>ಬೆಂಗಳೂರು ನಗರ ಜಿಲ್ಲಾ ವ್ಯಾಪ್ತಿಯಲ್ಲಿ ಗ್ರಾನೈಟ್ ಗಣಿಗಾರಿಕೆಗಾಗಿ ಗುತ್ತಿಗೆಗಳು ಮಂಜೂರಾಗಿರುವುದಿಲ್ಲ. ಬೆಂಗಳೂರು ಗ್ರಾಮಾಂತರ ವ್ಯಾಪ್ತಿಯಲ್ಲಿ ಗ್ರಾನೈಟ್ ಕಲ್ಲುಗಣಿಗಾರಿಕೆಗೆ ಪರವಾನಗಿ ನೀಡಿರುವ 39 ಗುತ್ತಿಗೆಗಳ ಪೈಕಿ 04 ಕಲ್ಲುಗಣಿ ಗುತ್ತಿಗೆಗಳಲ್ಲಿಗಣಿ ಕಾರ್ಯನಿರ್ವಹಿಸುತ್ತಿದ್ದು, ರಾತ್ರಿ ವೇಳೆಯಲ್ಲಿ ಕಲ್ಲುಗಣಿಗಾರಿಕೆಯನ್ನು ನಡೆಸುತ್ತಿರುವುದು ಕಂಡುಬಂದಿರುವುದಿಲ್ಲ.</td></tr>
</table>

| | | |
|---|---|---|
| ಇ) | ಪರವಾನಿಗೆ ಪಡೆದ ಸಂಸ್ಥೆಗಳಿಗೆ ಸರ್ಕಾರದಿಂದ ಯಾವ ಯಾವ ಷರತ್ತುಗಳು ಹಾಗೂ ನಿಬಂಧನೆಗಳನ್ನು ವಿಧಿಸಲಾಗಿರುತ್ತದೆ. | ಗ್ರಾನೈಟ್ ಗಣಿಗಾರಿಕೆಗಾಗಿ ಕಲ್ಲುಗಣಿ ಗುತ್ತಿಗೆಗಳನ್ನು ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು, 1994ರ ನಮೂನೆ-ಇ ರಲ್ಲಿನ ಗುತ್ತಿಗೆ ಕರಾರಿನ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ನೀಡಲಾಗಿರುತ್ತದೆ. ನಮೂನೆ-ಇ ರಲ್ಲಿನ ಮುಖ್ಯ ಷರತ್ತುಗಳು ಕೆಳಕಂಡಂತಿವೆ.<br>**THE COVENANTS OF THE LESSEES/LICENSEES**<br>1. Lessees to pay rents, royalties.<br>2. To maintain and keep boundary marks in good order.<br>3. To commence operations within a year and work in a workman like manner.<br>4. To indemnify Government against all claims.<br>5. To secure and keep in good condition pits shafts etc.,<br>6. To strengthen and support the quarry to necessary extent.<br>7. The lessee/licensee shall submit from time to time or when required, progress reports to the Director of Mines and Geology, along with analysis and representative samples of the minerals collected during the quarrying operations as also the periodical returns prescribed in the said Rules or in the manner prescribed by him from time to time.<br>8. To allow inspection of working.<br>9. To report accidents.<br>10. To report discovery of other minerals.<br>11. The lessee/licensee shall, at all times,<br>12. To maintain plans etc.,<br>13. To abide by the provisions of the laws in force in respect of labour welfare, safety measures, ecology and environment.<br>14. Notice for use of explosives, etc:<br>15. Government indemnified from paying compensation for in-jury to third parties.<br>16. Not to obstruct working of other minerals.<br>17. Lessee shall deposit any additional amount necessary equal to the security deposit.<br>18. Right of pre-emption.<br>19. Not to light fire in Forest Areas.<br>20. No right over produce other than minerals ores mentioned in the lease/licence.<br>ಗ್ರಾನೈಟ್ ಕಟ್ಟಿಂಗ್ ಹಾಗೂ ಪಾಲಿಶಿಂಗ್ ಕೈಗಾರಿಕೆ / ಉದ್ದಿಮೆಗಳಿಂದ ಉತ್ಪತ್ತಿಯಾಗುವ ಕಲುಷಿತ ನೀರನ್ನು ಸಂಪೂರ್ಣವಾಗಿ ಮರುಬಳಕೆ ಮಾಡುವಂತೆ ಹಾಗೂ ಉತ್ಪತ್ತಿಯಾಗುವ ಸ್ಲರಿಯನ್ನು ವೈಜ್ಞಾನಿಕವಾಗಿ ವಿಲೇವಾರಿ ಮಾಡುವಂತೆ ನಿಬಂಧನೆಯನ್ನು ವಿಧಿಸಿ, ಷರತ್ತುಬದ್ಧ ಸಮ್ಮತಿ ಪತ್ರವನ್ನು ನೀಡಲಾಗುತ್ತಿದೆ. |

| | | |
|---|---|---|
| ಈ) | ಷರತ್ತುಗಳು ಹಾಗೂ ನಿಬಂಧನೆಗಳನ್ನು ಗಾಳಿಗೆ ತೂರಿ ಅಕ್ರಮವಾಗಿ ಗಣಿಗಾರಿಕೆ ಹಾಗೂ ಗ್ರಾನೈಟ್ ಕಟ್ಟಿಂಗ್ ಮಾಡುತ್ತಿರುವವರ ವಿರುದ್ಧ ಸರ್ಕಾರ ಕೈಗೊಂಡ ಕ್ರಮಗಳೇನು: ಕಳೆದ 3 ವರ್ಷಗಳಲ್ಲಿ ನಡೆದಿರುವ ಇಂತಹ ಪ್ರಕರಣಗಳ ಸಂಖ್ಯೆ ಎಷ್ಟು? | ಬೆಂಗಳೂರು ಗ್ರಾಮಾಂತರ ಜಿಲ್ಲಾ ವ್ಯಾಪ್ತಿಯಲ್ಲಿ ಗ್ರಾನೈಟ್ ಕಟ್ಟಿಂಗ್ ಘಟಕಗಳಿಗೆ **ಭೇಟಿ** ನೀಡಿ ಸದರಿ ಘಟಕಗಳಲ್ಲಿ ದಾಸ್ತಾನಿರುವ ಗ್ರಾನೈಟ್ ದಿಮ್ಮಿಗಳ ಪರವಾನಿಗೆಗಳನ್ನು ಪರಿಶೀಲಿಸಲಾಗಿದ್ದು, ಕಳೆದ ಮೂರು ವರ್ಷಗಳಲ್ಲಿ ಅನಧಿಕೃತ ಗ್ರಾನೈಟ್ ದಾಸ್ತಾನು ಸಂಬಂಧ 46 ಪ್ರಕರಣಗಳನ್ನು ಪತ್ತೆ ಹಚ್ಚಿ 1.80 ಕೋಟಿ ರೂಗಳಷ್ಟು ದಂಡವಾಗಿ ಸಂಗ್ರಹ ಮಾಡಲಾಗಿರುತ್ತದೆ.<br><br>ಬೆಂಗಳೂರು ನಗರ ಹಾಗೂ ಗ್ರಾಮಾಂತರ ಜಿಲ್ಲೆಯ ವ್ಯಾಪ್ತಿಯಲ್ಲಿ ಜಲ (ಮಾಲಿನ್ಯ ನಿವಾರಣೆ ಮತ್ತು ನಿಯಂತ್ರಣ) ಕಾಯ್ದೆ, 1974 ರ ಅಡಿಯ ಸಮ್ಮತಿ ಪತ್ರಗಳಲ್ಲಿ ವಿಧಿಸಿರುವ ಷರತ್ತು ಹಾಗೂ ನಿಬಂಧನೆಗಳನ್ನು ಉಲ್ಲಂಘಿಸಿರುವ ಗ್ರಾನೈಟ್ ಕಟ್ಟಿಂಗ್ ಮತ್ತು ಪಾಲಿಶಿಂಗ್ ಘಟಕಗಳ ವಿರುದ್ಧ ಕಳೆದ ಮೂರು ವರ್ಷಗಳಲ್ಲಿ ಈ ಕೆಳಕಂಡಂತೆ ಕ್ರಮ ಜರುಗಿಸಲಾಗಿದೆ.<br><br>• ಸಮ್ಮತಿ ಪತ್ರಗಳಲ್ಲಿ ವಿಧಿಸಿರುವ ಷರತ್ತು ಹಾಗೂ ನಿಬಂಧನೆಗಳನ್ನು ಉಲ್ಲಂಘಿಸಿರುವ ಗ್ರಾನೈಟ್ ಕಟ್ಟಿಂಗ್ ಮತ್ತು ಪಾಲಿಶಿಂಗ್ ಘಟಕಗಳ ಸಂಖ್ಯೆ 36.<br>• ಉಲ್ಲಂಘಿತ ಗ್ರಾನೈಟ್ ಕಟ್ಟಿಂಗ್ ಮತ್ತು ಪಾಲಿಶಿಂಗ್ ಕೈಗಾರಿಕೆಗಳಿಗೆ ಜಲ (ಮಾಲಿನ್ಯ ನಿವಾರಣೆ ಮತ್ತು ನಿಯಂತ್ರಣ) ಕಾಯ್ದೆ, 1974ರ ಅಡಿಯಲ್ಲಿ ಕೈಗಾರಿಕೆಗಳನ್ನು ಮುಚ್ಚುವ ಸಲುವಾಗಿ ಕಾರಣ ಕೇಳುವ ನೋಟೀಸ್ ಮತ್ತು ನೋಟೀಸ್ ಆಫ್ ಪ್ರಪೋಸ್ಡ್ ಡೈರೆಕ್ಷನ್ಸ್ ಅನ್ನು ಜಾರಿಗೊಳಿಸಲಾಗಿದೆ. |

ಸಂಖ್ಯೆ: ಸಿಐ 115 ಎಂಎಂಎನ್ 2020

(ಸಿ.ಸಿ. ಪಾಟೀಲ)
ಗಣಿ ಮತ್ತು ಭೂವಿಜ್ಞಾನ ಸಚಿವರು